ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಚಿಕ್ಕಬಳ್ಳಿಕೆರೆಯ ಪಿಕಪ್ ನಾಲೆಯ ಅಭಿವೃದ್ಧಿ ಬಗ್ಗೆ

ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) -

75(423) ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಮಂಡ್ಯ ಜಿಲ್ಲೆ ಕೆರೆಗೋಡು ಹೋಬಳಿ ಚಿಕ್ಕಬಳ್ಳಿ ಕೆರೆಯ ಪಿಕಪ್ ನಾಲೆಯ ಅಭಿವೃದ್ಧಿ ಕಾಮಗಾರಿ ಅಂದಾಜಿನಲ್ಲಿ ಗೂಳೂರು ಬೆಟ್ಟದ ಬಳಿ 150 ಮೀ. ಉದ್ದದ ಮೇಲ್ಗಾಲುವೆಯನ್ನು ನಿರ್ಮಿಸುವ ಸಂಬಂಧ ಸಮೀಕ್ಷಾ ಕಾರ್ಯ ಕೈಗೊಂಡು, ವಿನ್ಯಾಸ ಹಾಗೂ ಸಾಧ್ಯಾ ಸಾಧ್ಯತೆ ಬಗೆ ಪರಿಶೀಲನೆಯನ್ನು ಯಾವಾಗ ನಡೆಸಲಾಗಿದೆ; ಸಮೀಕ್ಷಾ ಕಾರ್ಯ ಹಾಗೂ ಸಾಧ್ಯಾ ಸಾಧ್ಯಾತೆಯ ವರದಿಯ ಅಂಶವೇನು ;

(ಆ) ಸದರಿ ಕಾಮಗಾರಿಯನ್ನು ಟೆಂಡರ್ ಪಡೆದ ಗುತ್ತಿಗೆದಾರರು ಒಪ್ಪಂದ ಮಾಡಿಕೊಳ್ಳಲು ನಿರಾಕರಿಸಲು ಕಾರಣಗಳೇನು; ಮರು ಟೆಂಡರ್ ಕರೆಯಲಾಗಿದೆಯೇ; ಮರು ಟೆಂಡರ್ ಕರೆಯದೇ ಇರಲು ಕಾರಣಗಳೇನು;

(ಇ) ಕಾವೇರಿ ನೀರಾವರಿ ನಿಗಮದ ಮಂಡಳಿಯ 70ನೇ ಸಭೆಯಲ್ಲಿ ಈ ಕಾಮಗಾರಿಯನ್ನು ಕೈಬಿಟ್ಟಿರುವುದು ನಿಜವೇ ; ಕಾರಣಗಳೇನು ;

(ಈ) ಸದರಿ ಕಾಮಗಾರಿಯಿಂದ ರೈತರಿಗೆ/ಸಾರ್ವಜನಿಕರಿಗೆ ತುಂಬ ಉಪಯೋಗವಾಗಲಿದ್ದು, ಈ ಕಾಮಗಾರಿಯನ್ನು ಮತ್ತೆ ಕೈಗೆತ್ತಿಕೊಳ್ಳಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಈ ಕುರಿತು ಸರ್ಕಾರದ ನಿಲುವೇನು;

(ಉ) ಗೂಳೂರು ಬೆಟ್ಟದಿಂದ ಮುಂದಕ್ಕೆ ಬರುವ ನೀರು ಸರಾಗವಾಗಿ ಹರಿಯಲು ಎರಡು ಕಲ್ಲುಬಂಡೆ ಅಡ್ಡಲಾಗಿ ಬಂದಿದ್ದು, ಈ ಕಲ್ಲುಬಂಡೆಗಳನ್ನು ಯಾವಾಗ ತೆರವುಗೊಳಿಸಲಾಗುವುದು ?